ಲಿಖಿತ ಮೂಲಕ ಉತ್ತರಿಸುವ ಪ್ರಶ್ನೆ



**ಕರ್ನಾಟಕ ವಿಧಾನ ಪರಿಷತ್ತು**

ಸೋಮವಾರ, ದಿನಾಂಕ: 09ನೇ ಮಾರ್ಚ್, 2020

ವನ್ಯಜೀವಿ ಸಂತ್ರಸ್ಥರ ಮನವಿಗಳನ್ನು ಸ್ವೀಕರಿಸುವ ಕುರಿತು

ಶ್ರೀ ಎನ್. ರವಿಕುಮಾರ್ (ವಿಧಾನಸಭೆಯಿಂದ ಚುನಾಯಿತರಾದವರು)

467 (414) ಮಾನ್ಯ ಅರಣ್ಯ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ:-

(ಅ) ವನ್ಯಜೀವಿ ಸಂಘರ್ಷದ ಸಂತ್ರಸ್ಥರ ಮನವಿಗಳನ್ನು ಸ್ವೀಕರಿಸಿ ಸರ್ಕಾರಕ್ಕೆ ಸಲ್ಲಿಸಲು ಸರ್ಕಾರದ ವತಿಯಿಂದ ಯಾವ ಯಾವ ಸೇವಾ ಸಂಸ್ಥೆಗಳನ್ನು ಗುರುತಿಸಲಾಗಿದೆ ; ಅವುಗಳ ಕೆಲಸಗಳೇನು; ಸಂತ್ರಸ್ಥರ ಮನವಿಗಳನ್ನು ಸಲ್ಲಿಸಲು ಬ್ರೋಕರ್‌ಗಳು ಅವಶ್ಯಕತೆ ಇದೆಯೇ ;

(ಆ) ಸ್ವಯಂಸೇವಾ ಸಂಸ್ಥೆಗಳು ಸಂರಕ್ಷಿತ ಅರಣ್ಯದಲ್ಲಿ ಕಾರ್ಯ ಚಟುವಟಿಕೆಗಳನ್ನು ನಡೆಸಲು ಸರ್ಕಾರ ಅನುಮತಿ ನೀಡಿದೆಯೇ; ಇಲ್ಲವಾದಲ್ಲಿ, ಅಕ್ರಮವಾಗಿ ಅರಣ್ಯದಲ್ಲಿ ತನ್ನ ಕಾರ್ಯ ಚಟುವಟಿಕೆಗಳನ್ನು ನಡೆಸುತ್ತಿರುವ ಸಂಸ್ಥೆಗಳ ಮೇಲೆ ಯಾವ ಕ್ರಮ ಕೈಗೊಂಡಿದೆ ;

(ಇ) ನಾಗರಹೊಳೆ ಮತ್ತು ಬಂಡೀಪುರ ಹುಲಿ ಸಂರಕ್ಷಿತ ಅರಣ್ಯದಲ್ಲಿ ಕಾರ್ಯನಿರ್ವಹಿಸುತ್ತಿರುವ ಸ್ವಯಂಸೇವಾ ಸಂಸ್ಥೆಗಳು ಸೇವೆಯ ಹೆಸರಿನಲ್ಲಿ ಅರಣ್ಯ ಸಂಪತ್ತನ್ನು ಲೂಟಿ ಮಾಡುವುದಿಲ್ಲ ಅಥವಾ ವನ್ಯಜೀವಿಗಳ ಬೇಟೆ ಮಾಡುತ್ತಿಲ್ಲ ಎಂಬುದಾಗಿ ಸರ್ಕಾರ ರಾಜ್ಯದ ಜನತೆಗೆ ಖಾತರಿ ನೀಡುತ್ತದೆಯೇ ; ಇಲ್ಲವಾದಲ್ಲಿ, ಅಂತಹ ಸ್ವಯಂಸೇವಾ ಸಂಸ್ಥೆಗಳನ್ನು ಮೀಸಲು ಅರಣ್ಯದಲ್ಲಿ ಅನಧಿಕೃತವಾಗಿ ಪ್ರವೇಶ ಮಾಡದಂತೆ ಇರಲು ಸರ್ಕಾರ ಯಾವ ಕ್ರಮಕೈಗೊಂಡಿದೆ?